ಇದೇ ದೇವತೆಗಳ ಸ್ಥಾನವೂ ಹೌದು.—ಯಮನ ಸುತ್ತಲೂ ವೇಣುನಾದವೂ, ಗಾನವೂ ಕೇಳಬರುತ್ತವೆ (೧೦-೧೩೫-೭).

ಯಮನಿಗೋಸ್ಕರ ಸೋಮರಸವು ಸಿದ್ಧಪಡಿಸಲ್ಪಡುತ್ತದೆ; ಅವನಿಗೆ ಘೃತವು ಅರ್ಪಿತವಾಗುತ್ತದೆ (೧೦-೧೪-೧೩, ೧೪); ಮತ್ತು ಯಾಗಶಾಲೆಗೆ ಬಂದು, ಆಸನದಲ್ಲಿ ಆಸೀನನಾಗಬೇಕೆಂದು ಪ್ರಾರ್ಥನೆ (೧೦-೧೪-೪) ಇದೆ.

ವಿವಸ್ವತನು ಅವನ ಜನಕ (೧೦-೧೪-೫) ಮತ್ತು ಸರಣ್ಯು ಎಂಬುವಳು ತಾಯಿಯೆಂದು ಉಕ್ತವಾಗಿದೆ (೧೦-೧೭-೧). ಅನೇಕ ಸಲ ವೈವಸ್ವತನೆಂದು ಕರೆದಿದೆ (೧೦-೧೪-೧ ; ಇತ್ಯಾದಿ). ಅವನಿಗೆ ಅಧಿಕರಾರೂ ಇಲ್ಲದುದರಿಂದ, ಯಮನೇ ವಿವಸ್ವತನಿಗಿಂತ ಶ್ರೇಷ್ಠನು (ಅ. ವೇ. ೧೮-೨-೩೨ ; ೧೮-೩-೬೧, ೬೨ಗಳನ್ನು ಹೋಲಿಸಿ).

ಯಮ ಯಮಿಗಳ ಸಂವಾದದಲ್ಲಿ ತಾವಿಬ್ಬರೂ ಗಂಧರ್ವ ಮತ್ತು ಜಲದೇವತೆಯ (ಅಪ್ಯಾ ಯೋಷಾ) ಮಕ್ಕಳೆಂದು ಹೇಳಿಕೊಂಡಿದಾರೆ (೧೦-೧೦-೪). ಯಮನೊಬ್ಬನೇ ಮರ್ತ್ಯನೆಂದು ಯಮಿಯು ಹೇಳುತ್ತಾಳೆ (೧೦-೧೦-೩). ಯಮನು ದೇಹವನ್ನು ತ್ಯಜಿಸಿ, ಮೃತ್ಯುವನ್ನೇ ಅಪೇಕ್ಷಿಸಿದನೆಂದು ಇದೆ (೧೦-೧೩-೪). ಅವನು ಅನಂತರ ಬರುವ ಅನೇಕರಿಗೆ ದಾರಿಯನ್ನು ತೋರಿಸುತ್ತಾ, ಬೇರೆ ಲೋಕಕ್ಕೆ ಹೋದನು ; ಇಲ್ಲಿಗೇ ಪುರಾತನರಾದ ಪಿತೃಗಳೂ ಹೋಗಿರುವುದು (೧೦-೧೪-೧,೨). ಅವನೇ ಮೃತರಾದ ಮರ್ತ್ಯರಿಗೆಲ್ಲಾ ಮೊದಲಿನವನು (ಅ. ವೇ. ೧೮-೩-೧೩). ಇಲ್ಲಿ ಮರ್ತ್ಯರೆಂದರೆ ಮನುಷ್ಯರೇ ಇರಬೇಕು ; ಆದರೆ, ಬೇರೆ ಕೆಲವು ಸಂದರ್ಭಗಳಲ್ಲಿ, ಮರ್ತಪದದಿಂದ ದೇವತೆಗಳೂ ಉದ್ದಿಷ್ಟರಾಗಿದ್ದಾರೆ. ಸತ್ತವರಲ್ಲಿ ಮೊದಲನೆಯವನೂ, ಬಹಳ ಪುರಾತನನೂ ಆದುದರಿಂದ, ಅವರಿಗೆಲ್ಲಾ ಒಡೆಯನೆನ್ನಿಸಿಕೊಳ್ಳುವುದು ಸ್ವಾಭಾವಿಕವೇ. ಅವನಿಗೆ ವಿಶ್ಪತಿ (ನೆಲಸಿದವರಿಗೆಲ್ಲಾ ಒಡೆಯ), ನಮ್ಮ ತಂದೆ ಎಂಬ ವಿಶೇಷಣಗಳಿವೆ (೧೦-೧೩೫-೧). ಯಮನ ಮೂಲಕವೇ, ಮುಂದೆ ಮನುಷ್ಯರಿಗೆಲ್ಲಾ, ವಿವಸ್ವಾನ್ ಆದಿತ್ಯನ ವಂಶಜರೆಂಬ ನಾಮಧೇಯವು ಬಂದಿರುವುದು (ತೈ. ಸಂ. ೬-೫-೬-೨ ; ಶ. ಬ್ರಾ. ೩-೧-೩-೪ ಮತ್ತು ಋ. ವೇ. ೧-೧೦೫-೯ಗಳನ್ನು ಹೋಲಿಸಿ). ಯಮನಿಂದ ದತ್ತವಾದ 'ಆಕಾಶದಲ್ಲಿ ಸಂಚರಿಸುವ ಅಶ್ವ'ವು, ಅಮರರಾಗತಕ್ಕವರಿಗೆ ಯಮನು ಕೊಡುವ ಸ್ಥಾನವೇ ಇರಬಹುದು (೧-೧೬೩-೨ ; ೧-೮೩-೫ನ್ನು ಹೋಲಿಸಿ) ; ಹೀಗೆಯೇ ಯಮನಿಗೂ ಆದಿತ್ಯನಿಗೂ ಸಂಬಂಧವು ಋಗ್ವೇದದಲ್ಲಿಯೂ ಉಕ್ತವಾಗಿದೆಯನ್ನಬಹುದು.

ಮೃತ್ಯುವೇ ಯಮನ ಮಾರ್ಗ (೧-೩೮-೫) ಮತ್ತು ಒಂದು ಸಲ (೧-೧೬೫-೪ ; ಮೈ. ಸಂ. ೨-೫-೬ ಮತ್ತು ಅ. ವೇ. ೬-೨೮-೩೧ ಮತ್ತು ೬-೯೩-೧ಗಳನ್ನು ಹೋಲಿಸಿ) ಅವನೇ ಮೃತ್ಯುವೆಂತಲೂ ಹೇಳಿದೆ. ಯಮನು ಉಪಯೋಗಿಸುವ ಶೃಂಖಲೆಗಳು ವರುಣ ಪಾಶಕ್ಕೆ ಉಪಮಿತವಾಗಿವೆ (೧೦-೯೭-೧೬). ಇಂತಹ ವಾಕ್ಯಗಳು ಮತ್ತು ಅವನ ದೂತರ ಲಕ್ಷಣಗಳಿಂದ ಯಮನು ಭಯಂಕರನೆಂದು ತೋರಬಹುದು. ಅಥರ್ವವೇದದಲ್ಲಿ ಮತ್ತು ಇತರ ವೈದಿಕ ಇತಿಹಾಸಗಳಲ್ಲಿ, ಮರಣ ಮತ್ತು ಮರಣಾನಂತರದ ದುಃಖಾನುಭವಗಳು ಯಮಕರ್ತೃಕವಾದುವೆಂದು ಹೇಳಿರುವುದರಿಂದ, ಯಮನೇ ಮೃತ್ಯುದೇವತೆಯೆಂದು ಪರಿಗಣಿತನಾಗಿದಾನೆ. ಆದರೆ ಪುರಾಣಗಳಲ್ಲಿಯೂ ಕೂಡ, ನರಕವೊಂದೇ ಯಮನ ರಾಜ್ಯವಲ್ಲವೆಂದು ಸ್ಪಷ್ಟವಾಗಿದೆ. ಇತರ ಸಂಹಿತೆಗಳಲ್ಲಿಯೂ, ಅಂತಕ, ಮೃತ್ಯು, ನಿರ್ಋತಿ (ರೋಗ) ಇವರುಗಳ ಪಟ್ಟಿಯಲ್ಲಿ ಯಮನೂ ಒಬ್ಬನು (ವಾ. ಸಂ. ೩೯-೧೩ ; ಅ. ವೇ. ೬-೨೯-೩ ; ಮೈ. ಸಂ. ೨-೫-೬) ಮತ್ತು ಮೃತ್ಯುವು ಅವನ ದೂತ (ಅ. ವೇ. ೫-೩೦-೧೨ ; ೧೮-೨-೨೭ ; ಇತ್ಯಾದಿ). ಮೃತ್ಯುವು ಮನುಷ್ಯರಿಗೆ ಅಧಿಪತಿಯೆಂದೂ ಯಮನು ಪ್ರೇತಗಳಿಗೆ ಅಧಿಪತಿಯೆಂದೂ

(ಅ. ವೇ. ೫-೨೪-೧೩, ೧೪), ನಿದ್ರೆಯು (ನಿದ್ರಾಧಿದೇವತೆಯು) ಯಮನ ರಾಜ್ಯದಿಂದ ಬರುತ್ತಾಳೆಂದೂ (ಅ. ವೇ. ೧೯-೫೬-೧) ಹೇಳಿದೆ.

ಯಮ ಎಂಬ ಪದಕ್ಕೆ 'ಅವಳಿ' ಎಂಬರ್ಥದಲ್ಲಿಯೂ ಪ್ರಯೋಗವಿದೆ. ಸಾಧಾರಣವಾಗಿ ಪುಲ್ಲಿಂಗ ಅಥವಾ ಸ್ತ್ರೀಲಿಂಗ ದ್ವಿವಚನದಲ್ಲಿ—ಮತ್ತು ಲಗಾಮು ಅಥವಾ ಮಾರ್ಗದರ್ಶಕ ಎಂಬರ್ಥದಲ್ಲಿಯೂ ಕೆಲವು ಪ್ರಯೋಗಗಳಿವೆ. ಯಮ ಮತ್ತು ಯಮಿಗಳು ಯಮಳರೆಂದೇ ಭಾವನೆ (೧೦-೧೦). ಇತರ ಗ್ರಂಥಗಳಲ್ಲಿ, ಯಮನನ್ನು ಮೃತ್ಯುದೇವತೆ, ದುಷ್ಟಶಿಕ್ಷಕ ಮೊದಲಾದ ರೀತಿಯಲ್ಲಿ ವರ್ಣಿಸುವಾಗ, ಈ ಪದವು ಯಮ್ (ಹತೋಟಿಯಲ್ಲಿಟ್ಟುಕೋ) ಧಾತುವಿನಿಂದ ನಿಷ್ಪನ್ನವಾದುದೆಂದು ಅಭಿಪ್ರಾಯವಿದ್ದರೂ, ಇದಕ್ಕೆ ವೇದಗಳಲ್ಲಿ ಆಧಾರವಿಲ್ಲವೇ ಇಲ್ಲವೆನ್ನಬಹುದು.

ಒಂದು ಪಕ್ಷಿಯು—ಸಾಧಾರಣವಾಗಿ ಗೂಬೆ ಅಥವಾ ಕಪೋತ—ಯಮನ ದೂತ (೧೦-೧೬೫-೪; ೧೦-೧೨೩-೬ನ್ನು ಹೋಲಿಸಿ); ಇಲ್ಲೆಲ್ಲಾ ಯಮನೇ ಮೃತ್ಯುವೆಂದು ಭಾವನೆ; ಆದುದರಿಂದ ಯಮ ಮತ್ತು ಮೃತ್ಯುಗಳಿಗೆ ಒಬ್ಬನೇ ದೂತನು (ಅ. ವೇ. ೮-೮-೧೧). ಇನ್ನೂ ಸ್ವಲ್ಪ ವಿಶದವಾಗಿ ಚರ್ಚಿಸಲ್ಪಟ್ಟಿರುವುದು ಯಮನ ನಿಯತ ದೂತರಾದ ಎರಡು ನಾಯಿಗಳ ವಿಷಯ (೧೦-೧೪-೧೦ರಿಂದ ೧೨). ಅವುಗಳಿಗೆ ನಾಲ್ಕು ಕಣ್ಣುಗಳು, ಅಗಲವಾದ ಮೂಗುಗಳು; ಮೈಮೇಲೆಲ್ಲಾ ಚುಕ್ಕೆ ಚುಕ್ಕೆಗಳು ಮತ್ತು ಕಂದುಬಣ್ಣ; ಅವು ಸರಮೆಯ ಮಕ್ಕಳು (ಸಾರಮೇಯ). ಯಮಲೋಕದ ಮಾರ್ಗವನ್ನು ರಕ್ಷಿಸುವ ರಕ್ಷಕರು (೧೦-೧೪-೧೧). ಅಥವಾ ಆ ದಾರಿಯಲ್ಲಿ ಕುಳಿತಿರುತ್ತವೆ (ಅ. ವೇ. ೧೮-೨-೧೨). ಈ ಎರಡು ನಾಯಿಗಳನ್ನೂ ದಾಟಿ, ಬೇಗ ಬೇಗ ಹೋಗಿ ಪಿತೃಗಳನ್ನು ಸೇರಿಕೋ ಎಂದು ಮೃತನಿಗೆ ಬುದ್ಧಿವಾದ (೧೦-೧೪-೧೦); ಮೃತನನ್ನು ಪಿತೃಗಳಿಗೆ ಒಪ್ಪಿಸಿ, ಅವನಿಗೆ ಕ್ಷೇಮಾರೋಗ್ಯಗಳನ್ನು ಅನುಗ್ರಹಿಸೆಂದು ಯಮನಿಗೆ ಪ್ರಾರ್ಥನೆ. ತಮ್ಮ ಜೀವರೂಪದಲ್ಲಿಯೇ ತೃಪ್ತರಾಗಿ, ಯಮನ ದೂತರಂತೆ, ಮನುಷ್ಯರ ಮಧ್ಯದಲ್ಲಿ ಸಂಚರಿಸುತ್ತಾರೆ. ಸೂರ್ಯನ ಬೆಳಕನ್ನು ಶಾಶ್ವತವಾಗಿ ಅನುಭವಿಸುವಂತೆ ಮನುಷ್ಯರಿಗೆ ಅನುಗ್ರಹ ಮಾಡಬೇಕೆಂದು ಅವರಿಗೂ (ನಾಯಿಗಳಿಗೂ) ಪ್ರಾರ್ಥನ ಇದೆ. ಮನುಷ್ಯರಲ್ಲಿ ಯಾವ ಯಾವ ಕಾಲದಲ್ಲಿ ಯಾರು ಯಾರು ಸಾಯಬೇಕೆಂಬುವನ್ನು ನಿರೀಕ್ಷಿಸುತ್ತಿದ್ದು, ಯಮಲೋಕದ ಮಾರ್ಗದಲ್ಲಿ, ಅಂಥವರನ್ನು ರಕ್ಷಿಸುವುದೇ ಇವರ ಕರ್ಮವಿರಬೇಕು. ಮನುಷ್ಯರನ್ನು ಈ ಮಾರ್ಗದಲ್ಲಿ, ಈ ನಾಯಿಗಳು ಹೋಗಗೊಡುವುದಿಲ್ಲವೆಂಬುದಕ್ಕೆ ಆಧಾರ ಸಾಲದು. ೭-೫೫-೨ರಿಂದ ೫ ವಾಕ್ಯಗಳಲ್ಲಿ ಈ ಅಭಿಪ್ರಾಯ ಬರುತ್ತದೆಂದು ಹೇಳಬಹುದು. ಅಥರ್ವವೇದದಲ್ಲಿ ಯಮನ ದೂತರನ್ನು ನಿರ್ದೇಶಿಸಲು ಬಹುವಚನ ಮತ್ತು ದ್ವಿವಚನಗಳೆರಡಲ್ಲಿಯೂ ಪದಗಳು ಪ್ರಯೋಗಿಸಲ್ಪಟ್ಟಿವೆ (ಅ. ವೇ. ೮-೨-೧೧; ೮-೮-೧೧; ೫-೩೦-೬). ಎರಡು ನಾಯಿಗಳಲ್ಲಿ ಒಂದು ಶಬಲಾ, ಮತ್ತೊಂದು ಶ್ಯಾಮ (ಅ. ವೇ. ೮-೧-೯). ಯಮ; ಯಮಿಗಳೇ ಈ ಎರಡು ನಾಯಿಗಳೆಂದು ಕೆಲವರೂ, ಸೂರ್ಯ ಚಂದ್ರರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಯಮನು ಪ್ರಕೃತಿಯ ಒಂದಂಶದ ಪ್ರತಿನಿಧಿಯೆಂದೂ, ಅಗ್ನಿಯರೂಪ ವಿಶೇಷ, ಸೂರ್ಯ, ಸಂಧ್ಯಾಕಾಲ, ಅಥವಾ ಅಸ್ತಮಿಸುವ ಸೂರ್ಯ, ಆದುದರಿಂದ ಮೃತ್ಯು ದೇವತೆ ಇರಬಹುದೆಂದೂ ಅಭಿಪ್ರಾಯಪಡುತ್ತಾರೆ.

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್, ಕ್ಲಾಕ್ ಟವರ್ ಸ್ಕ್ವೇರ್
ಮೈಸೂರು, 1950